17/7/19

# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 334 |
| ಸದಸ್ಯರ ಹೆಸರು | ಶ್ರೀ ಎಸ್.ನಾಗರಾಜ್ |
| ಉತ್ತರಿಸುವ ದಿನಾಂಕ: | 17.07.2019 |
| ಉತ್ತರಿಸುವವರು | ಮುಜರಾಯಿ ಹಾಗೂ ಕೌಶಲ್ಯಾಭಿವೃದ್ಧಿ ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು |

| | ಪ್ರಶ್ನೆ | ಉತ್ತರ |
|---|---|---|
| ಅ | ಬಿಳಿಗಿರಿ ರಂಗನ ಬೆಟ್ಟದ ದೇವಾಲಯಗಳ ಪುನರ್ ನಿರ್ಮಾಣ ಕಾರ್ಯ ಯಾವಾಗ ಆರಂಭವಾಯಿತು; ಇದಕ್ಕೆ ಒದಗಿಸಿದ್ದ ಅನುದಾನ ಎಷ್ಟು; ಇದುವರೆಗೆ ಪೂರ್ಣವಾಗಿರುವ ಬಾಕಿ ಉಳಿದಿರುವ ಕಾಮಗಾರಿಗಳು ಯಾವುವು; ಬಾಕಿ ಕಾಮಗಾರಿಗಳನ್ನು ಯಾವಾಗ ಪೂರ್ಣಗೊಳಿಸಲಾಗುವುದು. | ಚಾಮರಾಜನಗರ ಜಿಲ್ಲೆ, ಯಳಂದೂರು ತಾಲ್ಲೂಕು ಬಿಳಿಗಿರಿರಂಗನಬೆಟ್ಟದ ಶ್ರೀ ಬಿಳಿಗಿರಿರಂಗನಾಥಸ್ವಾಮಿ ದೇವಾಲಯವು ಧಾರ್ಮಿಕ ದತ್ತಿ ಇಲಾಖೆಯ ಸಮೂಹ 'ಎ' ಪ್ರವರ್ಗದ ಅಧಿಸೂಚಿತ ಸಂಸ್ಥೆಯಾಗಿರುತ್ತದೆ. ಈ ದೇವಾಲಯದ ಪುನರ್ ಜೀರ್ಣೋದ್ಧಾರ ಕಾಮಗಾರಿಯನ್ನು ರಾಜ್ಯ ಪ್ರಾಚ್ಯ ವಸ್ತು ಇಲಾಖಾ ವತಿಯಿಂದ ರೂ.240.00ಲಕ್ಷಗಳ ವೆಚ್ಚದಲ್ಲಿ ಏಪ್ರಿಲ್ 2017ರಲ್ಲಿ ಆರಂಭಿಸಲಾಗಿದೆ.<br><br>ಈವರೆಗೆ ಕೈಗೊಂಡಿರುವ ಹಾಗೂ ಬಾಕಿ ಉಳಿದಿರುವ ಕಾಮಗಾರಿಗಳ ವಿವರ ಕೆಳಗಿನಂತಿದೆ.<br><br>(ಕ್ರ ಸಂ / ಕಾಮಗಾರಿ ಸ್ವರೂಪ / ಹಂತ)<br>1. ಹಳೇ ದೇವಾಲಯ ಸಂಪೂರ್ಣ ತೆರವುಗೊಳಿಸುವುದು — ಪೂರ್ಣಗೊಂಡಿರುತ್ತದೆ.<br>2. ಹಳೆ ದೇವಾಲಯದ ಸ್ಥಳದಲ್ಲಿ ಪುನರ್ ನಿರ್ಮಾಣ — ಪೂರ್ಣಗೊಂಡಿರುತ್ತದೆ.<br>3. ದೇವಾಲಯದ ಒಳಭಾಗದ ಆವರಣದಲ್ಲಿ ನೆಲಹಾಸು — ಪೂರ್ಣಗೊಂಡಿರುತ್ತದೆ<br>4. ದೇವಾಲಯಕ್ಕೆ ಆರ್.ಸಿ.ಸಿ ಹಾಕುವುದು. — ಪ್ರಗತಿಯಲ್ಲಿರುತ್ತದೆ<br><br>ಈ ದೇವಾಲಯದ ಪುನರ್ ನಿರ್ಮಾಣದ ಕಾಮಗಾರಿಯನ್ನು ಆಗಸ್ಟ್ 2019ರ ಅಂತ್ಯಕ್ಕೆ ಮುಕ್ತಾಯಗೊಳ್ಳಲಿದೆ.<br><br>ಅಲ್ಲದೆ ಪ್ರವಾಸೋದ್ಯಮ ಇಲಾಖೆಯಿಂದ ಶ್ರೀ ಬಿಳಿಗಿರಿರಂಗನಾಥ ಸ್ವಾಮಿ ದೇವಾಲಯದ ಬಳಿ ಕೆಳಕಂಡ ಅಭಿವೃದ್ಧಿ ಕಾಮಗಾರಿಗಳನ್ನು ಪ್ರವಾಸೋದ್ಯಮ ಇಲಾಖೆಯಿಂದ ರೂ.500.00ಲಕ್ಷಗಳಲ್ಲಿ ಕೈಗೊಳ್ಳಲು ಅಂದಾಜು ಪಟ್ಟಿಗೆ ಆಡಳಿತಾತ್ಮಕ ಅನುಮೋದನೆಯನ್ನು ಪಡೆಯಲು ಕ್ರಮವಹಿಸಲಾಗಿದೆ.<br><br>(ಕ್ರ. ಸಂ / ಕಾಮಗಾರಿ ವಿವರ)<br>1. ಬಿಳಿಗಿರಿ ರಂಗನಾಥ ಸ್ವಾಮಿ ದೇವಸ್ಥಾನದ ರಾಜಗೋಪುರದ ಮೆಟ್ಟಿಲು ನಿರ್ಮಾಣ<br>2. ಬಿಳಿಗಿರಿ ರಂಗನಾಥ ಸ್ವಾಮಿ ದೇವಸ್ಥಾನದ ಪ್ರಾಕಾರಕ್ಕೆ ನೆಲಹಾಸು ಅಳವಡಿಸುವ ಕಾಮಗಾರಿ. |
| ಆ | ದೇವಾಲಯದ ಪುನರ್ ನಿರ್ಮಾಣ ಕಾರ್ಯದಲ್ಲಿ ಕಳಪೆ ಗುಣಮಟ್ಟದ ಕಾಮಗಾರಿಗಳನ್ನು ಮಾಡಲಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಶ್ರೀ ಬಿಳಿಗಿರಿರಂಗನಾಥಸ್ವಾಮಿ ದೇವಾಲಯದ ಜೀರ್ಣೋದ್ಧಾರ ಕಾಮಗಾರಿಯು ಪ್ರಗತಿಯಲ್ಲಿರುತ್ತದೆ, ಸದರಿ ಕಾಮಗಾರಿಯು ಕಳಪೆ ಕಾಮಗಾರಿಯಿಂದಾಗಿ ದೇವಾಲಯದ ಮೇಲ್ಛಾವಣಿಯು ಮಳೆ ಬಂದರೆ ಸೋರುತ್ತಿರುವುದೆಂದು ದಿನಾಂಕ:05.06.2019ರ ಚಾಮರಾಜನಗರ ಮಿತ್ರ |

| | | |
|---|---|---|
| | ಬಂದಿದ್ದಲ್ಲಿ, ತಪ್ಪಿತಸ್ಥರ ವಿರುದ್ಧ ಯಾವ ಕ್ರಮಗಳನ್ನು ಜರುಗಿಸಲಾಗಿದೆ; ಇದನ್ನು ಸರಿಪಡಿಸಲು ಯಾವ ಸೂಕ್ತ ಕ್ರಮಗಳನ್ನು ಜರುಗಿಸಲಾಗಿದೆ; | ದಿನ ಪತ್ರಿಕೆಯಲ್ಲಿ ಕಳಪೆ ಕಾಮಗಾರಿಯ ಬಗ್ಗೆ ವರದಿಯಾಗಿರುತ್ತದೆ. ಈ ಸಂಬಂಧ ಸದರಿ ದೇವಾಲಯಕ್ಕೆ ದಿನಾಂಕ:29-06-2019 ರಂದು ಭೇಟಿ ನೀಡಿ ಸಂಬಂಧಪಟ್ಟ ಇಂಜಿನಿಯರ್‌ಗಳೊಂದಿಗೆ ಕಾಮಗಾರಿಯ ಬಗ್ಗೆ ಪರಿಶೀಲಿಸಿದ್ದು ಸದರಿ ಕಾಮಗಾರಿಯಲ್ಲಿ ಕಂಡು ಬಂದಿರುವ ಲೋಪದೋಷಗಳನ್ನು ತುರ್ತಾಗಿ ಸರಿಪಡಿಸುವಂತೆ ಸಂಬಂಧಪಟ್ಟವರಿಗೆ ಸ್ಥಳದಲ್ಲಿಯೇ ಸೂಚಿಸಲಾಗಿರುತ್ತದೆ ಹಾಗೂ ಕಾಮಗಾರಿಯು ವಿಳಂಬವಾಗಲು ಮತ್ತು ಅಪೂರ್ಣವಾಗಲು ಕಾರಣಕರ್ತರಾದ ಗುತ್ತಿಗೆದಾರ ಹಾಗೂ ಪುರಾತತ್ವ ಇಲಾಖೆ ಇಂಜಿನಿಯರ್‌ಗಳ ಮೇಲೆ ನಿಯಮಾನುಸಾರ ಕ್ರಮ ಕೈಗೊಳ್ಳುವಂತೆ ಸರ್ಕಾರದ ಕಾರ್ಯದರ್ಶಿಗಳಿಗೆ ಡಿಪಿಎಸ್/(2) ಸಿಆರ್: 108/2014-15 ದಿನಾಂಕ:03-07-2019ರ ಪತ್ರದಲ್ಲಿ ಕೋರಲಾಗಿರುತ್ತದೆ. |
| ಇ | ಭಕ್ತಾಧಿಗಳಿಗೆ ಶೌಚಗೃಹದ ಕೊರತೆ ಇದ್ದು, ಸೂಕ್ತವಾದ ಸ್ಥಳದಲ್ಲಿ ಶೌಚಾಲಯವನ್ನು ನಿರ್ಮಿಸಿ ನೀರು ಸರಬರಾಜು ಮಾಡಿ, ದಿನವಿಡೀ ಭಕ್ತಾದಿಗಳ ಉಪಯೋಗಕ್ಕೆ ದೊರೆಯುವಂತೆ ವ್ಯವಸ್ಥೆ ಮಾಡುವ ನಿಟ್ಟಿನಲ್ಲಿ ಕೈಗೊಂಡಿರುವ ಕ್ರಮಗಳೇನು? | ಶ್ರೀ ಬಿಳಿಗಿರಿರಂಗನಾಥ ಬೆಟ್ಟದ ಬಸ್ ನಿಲ್ದಾಣದ ಬಳಿ ಸುಸಜ್ಜಿತ ಶೌಚಾಲಯ ಇದ್ದು ಭಕ್ತಾಧಿಗಳ ಉಪಯೋಗಕ್ಕೆ ಅನುಕೂಲವಾಗಿರುತ್ತದೆ. ಹಾಲಿ ದೇವಾಲಯದ ಕಾರ್ ನಿಲ್ದಾಣದ ಬಳಿ ಹಳೆಯ ಶೌಚಾಲಯ ಇದ್ದು. ಇದರ ದುರಸ್ಥಿ ಹಾಗೂ ನೀರಿನ ವ್ಯವಸ್ಥೆಗೆ ಓವರ್ ಹೆಡ್ ಟ್ಯಾಂಕ್ ನಿರ್ಮಾಣಕ್ಕಾಗಿ ನೀರಿನ ಪೈಪ್‌ಲೈನ್ ಕಾರ್ಯ ಆರಂಭವಾಗಿದ್ದು ಸದರಿ ಕಾಮಗಾರಿ ಪೂರ್ಣಗೊಂಡ ನಂತರ ದಿನವಿಡಿ ನೀರಿನ ವ್ಯವಸ್ಥೆ ಮಾಡಿ ಭಕ್ತಾಧಿಗಳಿಗೆ ಅನುಕೂಲ ಮಾಡಿಕೊಡಲಾಗುತ್ತದೆ. |

(ಸಂಖ್ಯೆ:ಕಂಇ 26 ಮುಸಪ್ರ 2019)

(ಪಿ.ಟಿ. ಪರಮೇಶ್ವರ ನಾಯ್ಕ)
ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ, ಜೀವನೋಪಾಯ
ಮತ್ತು ಮುಜರಾಯಿ ಸಚಿವರು